## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 377 |
| ಸದಸ್ಯರ ಹೆಸರು | : | ಶ್ರೀ ಕೆ.ಪ್ರತಾಪ್‌ಚಂದ್ರ ಶೆಟ್ಟಿ, (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 15-09-2021. |
| ಉತ್ತರಿಸುವ ಸಚಿವರು | : | ಮಾನ್ಯ ಲೋಕೋಪಯೋಗಿ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಷ್ಟ್ರೀಯ ಹೆದ್ದಾರಿಯ 66 ರಲ್ಲಿರುವ ಜಾಹಿರಾತು ಫಲಕಗಳ ಸಂಖ್ಯೆ ಎಷ್ಟು; ಅವುಗಳಿಗೆ ಪರವಾನಿಗೆ ನೀಡುವ ಪ್ರಾಧಿಕಾರ ಯಾವುದು; ಕಳೆದ ಮೂರು ವರ್ಷಗಳಿಂದ ಈ ಜಾಹಿರಾತುಗಳಿಂದ ಸಂಗ್ರಹಿಸಲಾದ ವಾರ್ಷಿಕ ತೆರಿಗೆ ಮೊತ್ತವೆಷ್ಟು; ಅವುಗಳನ್ನು ಜಮೆ ಮಾಡಿದ ಲೆಕ್ಕ ಶೀರ್ಷಿಕೆ ಯಾವುದು; ವೆಚ್ಚ ಮಾಡಿದ ಮೊತ್ತವೆಷ್ಟು; ಈ ಆದಾಯವನ್ನು ಯಾವ ಉದ್ದೇಶಕ್ಕಾಗಿ ವೆಚ್ಚ ಮಾಡಲಾಗಿದೆ; (ವರ್ಷವಾರು, ಜಿಲ್ಲಾವಾರು, ಲೆಕ್ಕಶೀರ್ಷಿಕೆವಾರು ಮಾಹಿತಿಯನ್ನು ನಿಡುವುದು) | ರಾಷ್ಟ್ರೀಯ ಹೆದ್ದಾರಿ-66 ರಸ್ತೆಯು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಧಿಕಾರ (NHAI) ವ್ಯಾಪ್ತಿಯಲ್ಲಿದ್ದು, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ಈ ಕೆಳಕಂಡಂತೆ ಮಾಹಿತಿ ಒದಗಿಸಿರುತ್ತಾರೆ.<br>1. ರಾಷ್ಟ್ರೀಯ ಹೆದ್ದಾರಿ-66 ರಲ್ಲಿರುವ ಜಾಹಿರಾತು ಫಲಕಗಳ ಸಂಖ್ಯೆ – ಶೂನ್ಯ<br>2. ಅವುಗಳಿಗೆ ಪರವಾನಿಗೆ ನೀಡುವ ಪ್ರಾಧಿಕಾರ – ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ/ಭೂ ಸಾರಿಗೆ ಮತ್ತು ಹೆದ್ದಾರಿಗಳ ಮಂತ್ರಾಲಯ<br>3. ಈ ಜಾಹಿರಾತುಗಳಿಂದ ಸಂಗ್ರಹಿಸಲಾದ ವಾರ್ಷಿಕ ತೆರಿಗೆ ಮೊತ್ತ – ಶೂನ್ಯ<br>4. ಅವುಗಳನ್ನು ಜಮೆ ಮಾಡಿದ ಲೆಕ್ಕ ಶೀರ್ಷಿಕೆ<br>– ಅನ್ವಯಿಸುವುದಿಲ್ಲ. |
| ಆ) | ರಾಷ್ಟ್ರೀಯ ಹೆದ್ದಾರಿ ಮತ್ತು ರಾಜ್ಯ ಹೆದ್ದಾರಿಯ ಪಕ್ಕ ಕಟ್ಟಡ ನಿರ್ಮಿಸಲಿರುವ ರೋಡ್ ಮಾರ್ಜಿನ್ ಎಷ್ಟು; ಉಡುಪಿ ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿ ಮತ್ತು ರಾಜ್ಯ ಹೆದ್ದಾರಿಯ ರೋಡ್ ಮಾರ್ಜಿನ್‌ನಲ್ಲಿ ನಿರ್ಮಿಸಿರುವ ಕಟ್ಟಡಗಳ ಸಂಖ್ಯೆ ಎಷ್ಟು; ಈ ಕಟ್ಟಡಗಳಿಂದ ಇಲಾಖೆಯಿಂದ ತೆರಿಗೆಯನ್ನು ಸಂಗ್ರಹಿಸಲಾಗುತ್ತಿದೆಯೇ; ಇಲ್ಲವಾದಲ್ಲಿ ಕಾರಣವೇನು; (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿಯನ್ನು ಒದಗಿಸುವುದು) | ರಾಷ್ಟ್ರೀಯ ಹೆದ್ದಾರಿ ಮತ್ತು ರಾಜ್ಯ ಹೆದ್ದಾರಿಗಳ ಮಧ್ಯ ಭಾಗದಿಂದ ಎರಡೂ ಕಡೆ 40 ಮೀಟರ್ ಬಿಟ್ಟು ಕಟ್ಟಡ ನಿರ್ಮಾಣ ಮಾಡುವುದು ಐ.ಆರ್.ಸಿ.-73-1980 ರನ್ವಯ ಕಡ್ಡಾಯವಿರುತ್ತದೆ.<br>ಮುಂದುವರೆದು, ಉಡುಪಿ ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿ ರೋಡ್ ಮಾರ್ಜಿನ್‌ನಲ್ಲಿ ನಿರ್ಮಿಸಿರುವ ಕಟ್ಟಡಗಳ ಸಂಖ್ಯೆ, ವಿವರಗಳನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ತಪಾಸಣೆಯನ್ವಯ ಸುಮಾರು 1200 ಕಟ್ಟಡಗಳು ಇರುತ್ತವೆ. ಸದರಿ ಕಟ್ಟಡಗಳು ROW ನ ವ್ಯಾಪ್ತಿಯಿಂದಾಚೆಗೆ ಬರುತ್ತವೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರವು ವರದಿಸಿರುತ್ತಾರೆ.<br>ಹಾಗೂ ಉಡುಪಿ ಜಿಲ್ಲೆಯ ರಾಜ್ಯ ಹೆದ್ದಾರಿಯ ರಸ್ತೆ ಮಾರ್ಜಿನ್‌ನಲ್ಲಿ ಕಟ್ಟಡ ನಿರ್ಮಿಸಲು ಲೋಕೋಪಯೋಗಿ ಇಲಾಖೆಯಿಂದ ಎನ್.ಓ.ಸಿ. ನೀಡಿರುವುದಿಲ್ಲ; ರೋಡ್ ಮಾರ್ಜಿನ್‌ನಲ್ಲಿ ಇರುವ ಕಟ್ಟಡಗಳಿಂದ ಈ ಇಲಾಖೆಯ ವತಿಯಿಂದ ತೆರಿಗೆಯನ್ನು ಸಂಗ್ರಹಿಸಲಾಗುತ್ತಿಲ್ಲ. |

| | | |
|---|---|---|
| ಇ) | ರಾಷ್ಟ್ರೀಯ ಹೆದ್ದಾರಿ ಮತ್ತು ರಾಜ್ಯ ಹೆದ್ದಾರಿಯ ಪಕ್ಕದ ಕುರುಚಲು ಗಿಡಗಳನ್ನು ಈ ಹಿಂದೆ ಗ್ಯಾಂಗ್ ಕೂಲಿ ಮುಖಾಂತರ ತೆರವು ಕಾರ್ಯವನ್ನು ನಡೆಸುತ್ತಿದ್ದು, ಪ್ರಸ್ತುತ ಯಾಂತ್ರೀಕೃತ ವ್ಯವಸ್ಥೆಯಿದ್ದರೂ ತೆರವು ಮಾಡದಿರಲು ಕಾರಣವೇನು; ವಾಹನ ಸವಾರರಿಗೆ ಆಗುತ್ತಿರುವ ತೊಂದರೆ ತಪ್ಪಿಸಲು ಸರ್ಕಾರದ ಕ್ರಮವೇನು? | ರಾಷ್ಟ್ರೀಯ ಹೆದ್ದಾರಿ ಪಕ್ಕದ ಕುರುಚಲು ಗಿಡಗಳನ್ನು ಗುತ್ತಿಗೆ ಕರಾರಿನ್ವಯ ಆಗಾಗ್ಗೆ ತೆರವು ಮಾಡಲಾಗುತ್ತಿದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿಸಿರುತ್ತಾರೆ.<br>ಲೋಕೋಪಯೋಗಿ ಇಲಾಖೆ ವ್ಯಾಪ್ತಿಯಲ್ಲಿ ಈ ಹಿಂದೆ ಇದ್ದ ಗ್ಯಾಂಗ್ ಕೂಲಿಗಳು ನಿವೃತ್ತಿಹೊಂದಿದ ನಂತರ ಹೊಸ ನೇಮಕಾತಿಯಾಗಿರುವುದಿಲ್ಲ. ಆದರೆ ಈ ಇಲಾಖೆಯ ವ್ಯಾಪ್ತಿಗೆ ಬರುವ ಎಲ್ಲಾ ರಸ್ತೆಗಳ ಪಕ್ಕದ ಕುರುಚಲು ಗಿಡಗಳನ್ನು ತೆರವುಗೊಳಿಸಲು ಸರಕಾರದಿಂದ ಅನುದಾನ ಬಿಡುಗಡೆಯಾಗಿದ್ದು ಅಂದಾಜುಪಟ್ಟಿಯನ್ನು ತಯಾರಿಸಿ ಗುತ್ತಿಗೆ ಮುಖಾಂತರ ಗುತ್ತಿಗೆದಾರರಿಗೆ ವಹಿಸಿಕೊಡಲಾಗಿರುತ್ತದೆ. ಪ್ರಸ್ತುತ ಸಾಲಿನಲ್ಲಿ ಈ ಇಲಾಖೆಯ ಎಲ್ಲಾ ರಸ್ತೆಗಳ ಪಕ್ಕದ ಕುರುಚಲು ಗಿಡಗಳನ್ನು ತೆರವು ಮಾಡುವ ಕಾರ್ಯವು ಪ್ರಗತಿಯಲ್ಲಿದೆ. ಆದುದರಿಂದ ಸದರಿ ರಸ್ತೆಗಳಲ್ಲಿ ವಾಹನ ಸವಾರರಿಗೆ ಸಂಚರಿಸಲು ಯಾವುದೇ ತೊಂದರೆ ಇರುವುದಿಲ್ಲ. |

ಕಡತ ಸಂಖ್ಯೆ: ಲೋಇ 217 ಸಿಎನ್‌ಹೆಚ್ 2021 (ಇ)

(ಸಿ.ಸಿ. ಪಾಟೀಲ್)
ಲೋಕೋಪಯೋಗಿ ಸಚಿವರು